ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಎಜಿಪಿ-9000 ವೃತ್ತಿ ಪದೋನ್ನತಿ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

09 (43) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಎಜಿಪಿ-9000 ವೃತ್ತಿ ಪದೋನ್ನತಿ ಪಡೆಯಲು ದಿನಾಂಕ : 11.07.2016ರ ಯು.ಜಿ.ಸಿ ಮಾರ್ಗಸೂಚಿಯಂತೆ ಯು.ಜಿ.ಸಿ ಪ್ರಾಯೋಜಕತ್ವದಲ್ಲಿ ಮತ್ತು ಕಾಲೇಜು ಶಿಕ್ಷಣ ಇಲಾಖೆಯಿಂದ ಗೊತ್ತುಪಡಿಸಿರುವ ಅನುಮೋದಿತ ತರಬೇತಿ ಸಂಸ್ಥೆಗಳಿಂದ ಕೈಗೊಳ್ಳುವ ಶಿಬಿರ/ಕಾರ್ಯಾಗಾರ/ ತರಬೇತಿಗಳಾವುವು; (ವಿವರಗಳನ್ನು ಒದಗಿಸುವುದು)

(ಆ) ದಿನಾಂಕ : 11.07.2016 ರ ಯು.ಜಿ.ಸಿ ಮಾರ್ಗಸೂಚಿಯನ್ವಯ AICTE ಪ್ರಾಯೋಜಿತ Engineering ಶಿಕ್ಷಣ ಸಂಸ್ಥೆಗಳಲಿ ಕೈಗೊಳ್ಳುವ 7 ಅಥವಾ ಹೆಚ್ಚಿನ ದಿನಗಳು ನಡೆಸಲ್ಪಡುವ FDP ತರಬೇತಿಗಳು ತರಬೇತಿಯನ್ನು ನೀಡಲು ಅರ್ಹತೆ ಪಡೆದಿರುವ /ಪಡೆಯದಿರುವ ಸಂಸ್ಥೆಗಳಾವುವು; (ಆದೇಶಗಳನ್ನು ಒದಗಿಸುವುದು)

(ಇ) ಎಜಿಪಿ-9000 ವೃತ್ತಿ ಪದೋನ್ನತಿ ನೀಡಲು ದಿನಾಂಕ : 10.10.2018 ರಂದು ನಡೆದ ಪರಿಶೀಲನಾ ಸಮಿತಿಯ ಮುಂದೆ ಹಾಜರಾಗಿದ್ದ ಸಹಾಯಕ ಪ್ರಾಧ್ಯಾಪಕರುಗಳಲ್ಲಿ ತಿರಸ್ಕೃತಗೊಂಡಿರುವವರು ಯಾರು; (ಮಾಹಿತಿಯನ್ನು ಒದಗಿಸುವುದು)

(ಈ) ತಿರಸ್ಕೃತಗೊಂಡ ಸಹಾಯಕ ಪ್ರಾಧ್ಯಾಪಕರುಗಳು ಹಾಜರುಪಡಿಸಿದ್ದ FDP ತರಬೇತಿ ಪ್ರಮಾಣ ಪತ್ರಗಳು, ಮತ್ತಿತರೆ ಕೋರ್ಸ್ ದಾಖಲೆಗಳನ್ನು ಪರಿಗಣಿಸುವ ಅಥವಾ ಪರಿಗಣಿಸದಿರುವ ಬಗ್ಗೆ ಯು.ಜಿ.ಸಿ ಯಿಂದ ಪಡೆಯಲಾದ ಸ್ಪಷ್ಟೀಕರಣ ಏನು; (ವಿವರಗಳನ್ನು ಒದಗಿಸುವುದು)

(ಉ) ದಿನಾಂಕ:10.10.2018 ರಂದು ನಡೆದ ಪರಿಶೀಲನಾ ಸಮಿತಿಯ ಮುಂದೆ ಹಾಜರಾಗಿದ್ದ ಸಹಾಯಕ ಪ್ರಾಧ್ಯಾಪಕರುಗಳು ಪ್ರಸ್ತಾಪನೆಗಳನ್ನು ಸಲ್ಲಿಸುವ ಮುನ್ನ ಇಂತಹದ್ದೇ ರಿಫ್ರೇಶರ್ ಕೋರ್ಸ್, ಕಿರು ಅವಧಿಯ ಕೋರ್ಸ್‌ಗಳು ಮತ್ತು FDP ತರಬೇತಿಗಳ ಬಗ್ಗೆ ಸರ್ಕಾರ ನಿರ್ದಿಷ್ಟವಾಗಿ ಸುತ್ತೋಲೆಗಳನ್ನು ಹೊರಡಿಸಿದೆಯೇ? (ಹೊರಡಿಸಿದ್ದಲ್ಲಿ ಪ್ರತಿಗಳನ್ನು ನೀಡುವುದು)